# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 584
2. ಸದಸ್ಯರ ಹೆಸರು : ಶ್ರೀ ಎಸ್.ನಾಗರಾಜು (ಸಂದೇಶ್ ನಾಗರಾಜು)
3. ಉತ್ತರಿಸಬೇಕಾದ ದಿನಾಂಕ : 24-09-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಸುಪ್ರಸಿದ್ಧ ಕೃಷ್ಣರಾಜಸಾಗರದ ಬೃಂದಾವನ ಉದ್ಯಾನವನವನ್ನು ವಿಶ್ವದರ್ಜೆಗೇರಿಸುವ ಬಗ್ಗೆ ಸರ್ಕಾರ ಚಿಂತನೆ ನಡೆಸುತ್ತಿದೆಯೇ; ಈ ಬಗ್ಗೆ ಯೋಜನೆ ಹಾಗೂ ರೂಪುರೇಷೆಗಳನ್ನು ಸಿದ್ಧಪಡಿಸಲಾಗಿದೆಯೇ; | ಕೃಷ್ಣರಾಜಸಾಗರದ ಬೃಂದಾವನ ಉದ್ಯಾನವನವನ್ನು ವಿಶ್ವದರ್ಜೆಗೇರಿಸುವ ಯೋಜನೆಯನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ (ಪಿ.ಪಿ.ಪಿ ಮಾದರಿಯಲ್ಲಿ) ಕೈಗೆತ್ತಿಕೊಳ್ಳಲು ಯೋಜನೆಯ ರೂಪರೇಷೆಗಳನ್ನೊಳಗೊಂಡ ಯೋಜನಾ ವರದಿಯನ್ನು ಸಿದ್ಧಪಡಿಸಲಾಗಿದ್ದು, ಅನುಮೋದನಾ ಪ್ರಕ್ರಿಯೆ ಜಾರಿಯಲ್ಲಿದೆ. |
| ಆ | ಈ ಉದ್ಯಾನವನದ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಸ್ತುತ ಯಾವ ಯಾವ ಕಾಮಗಾರಿಗಳು ಚಾಲನೆಯಲ್ಲಿವೆ; ಬೃಂದಾನವನ ಉದ್ಯಾನವನದ ವಾಹನ ನಿಲುಗಡೆ ಸ್ಥಳವನ್ನು ಅಭಿವೃದ್ಧಿಪಡಿಸಲು ಕ್ರಮ ತೆಗೆದುಕೊಳ್ಳಲಾಗುವುದೇ; | ಪ್ರಸ್ತುತ ಯಾವುದೇ ಅಭಿವೃದ್ಧಿ ಕಾಮಗಾರಿಗಳು ಚಾಲನೆಯಲ್ಲಿರುವುದಿಲ್ಲ.<br>ಬೃಂದಾವನ ಉದ್ಯಾನವನವನ್ನು ಪಿ.ಪಿ.ಪಿ ಮಾದರಿಯಲ್ಲಿ ಅಭಿವೃದ್ಧಿಪಡಿಸಲು ಸಿದ್ಧಪಡಿಸಿರುವ ಯೋಜನಾ ವರದಿಯಲ್ಲಿ ವಾಹನ ನಿಲುಗಡೆ ಸ್ಥಳವನ್ನು ಅಭಿವೃದ್ಧಿಪಡಿಸುವುದೂ ಒಳಗೊಂಡಿರುತ್ತದೆ. |
| ಇ | ಬೃಂದಾವನ ಉದ್ಯಾನವನ ವೀಕ್ಷಣೆಗೆ ಆಗಮಿಸುವ ಹಾಗೂ ಈ ರಸ್ತೆಯಲ್ಲಿ ಮುಂದೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿಗೆ, ಕೃಷ್ಣರಾಜಪೇಟೆ ತಾಲ್ಲೂಕಿನ ಬೂಕಿನಕೆರೆ, ವರಾಹನಾಥ ಕಲ್ಲಹಳ್ಳಿ ಕಡೆಗೆ ಹೋಗುವ ವಾಹನಗಳು ಕೃಷ್ಣರಾಜಸಾಗರ ಜಲಾಶಯದ ಹಿಂದೆ ಇರುವ ಸೇತುವೆಯನ್ನು ಹಾದು ಹೋಗಲು ವಾಹನ ಶುಲ್ಕವನ್ನು ಕಟ್ಟಬೇಕಾಗಿದೆಯೇ; ನಿಗದಿಪಡಿಸಿರುವ ವಾಹನ ಶುಲ್ಕಎಷ್ಟು? | ಸೇತುವೆಯನ್ನು ಹಾದು ಹೋಗಲು ವಾಹನ ಶುಲ್ಕವನ್ನು ಕಟ್ಟಬೇಕಾಗಿರುತ್ತದೆ. ಪ್ರಸ್ತುತ ನಿಗಧಿಪಡಿಸಿ ವಸೂಲು ಮಾಡುತ್ತಿರುವ ವಾಹನ ಶುಲ್ಕದ ವಿವರಗಳು ಈ ಕೆಳಕಂಡಂತಿದೆ: |

| ಕ್ರ ಸಂ | ವಾಹನ ವಿವರ | ಪರಿಷ್ಕೃತ ದರ ರೂ.ಗಳಲ್ಲಿ (ಜಿ.ಎಸ್.ಟಿ. ಸೇರಿ) |
|---|---|---|
| 1 | ಕಾರು, ಸುಮೋ, ಕ್ವಾಲೀಸ್ | 50.00 |
| 2 | ಮಿನಿ ಬಸ್ | 70.00 |
| 3 | ಬಸ್ಸು | 100.00 |
| 4. | ತ್ರಿಚಕ್ರ ವಾಹನ | 20.00 |
| 5 | ಲಾರಿ | 150.00 |
| 6 | ಲಾರಿ (6 ಚಕ್ರ) | 200.00 |
| 7 | ಲಾರಿ (10 ಚಕ್ರ) | 200.00 |

*ಸಂಖ್ಯೆ:ಜಸಂಇ 117 ಎನ್ಎಲ್ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು